# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1036 |
| ಸದಸ್ಯರ ಹೆಸರು | : | ಶ್ರೀ ಎನ್.ಅಪ್ಪಾಜಿಗೌಡ |
| ಉತ್ತರಿಸುವ ದಿನಾಂಕ | : | 10.03.2021. |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2018-19ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಮುದಾಯ ಬಲಪಡಿಸಲು ಅಂಬೇಡ್ಕರ್ ಅಭಿವೃದ್ಧಿ ನಿಗಮದಡಿ ನೀಡುವ ಸೌಲಭ್ಯಗಳು ಯಾವುವು; (ತಾಲ್ಲೂಕುವಾರು, ವರ್ಷವಾರು ಮಾಹಿತಿ ನೀಡುವುದು) | ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ 2018-19ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಪರಿಶಿಷ್ಟ ಜಾತಿ ಸಮುದಾಯವನ್ನು ಬಲಪಡಿಸಲು ರಾಜ್ಯದ ಎಲ್ಲಾ ವಿಧಾನ ಸಭಾ ಕ್ಷೇತ್ರಗಳಲ್ಲೂ ಒದಗಿಸಲಾಗುವ ಸೌಲಭ್ಯಗಳ ವಿವರಗಳನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ. |
| (ಆ) | 2020-21ನೇ ಸಾಲಿನಲ್ಲಿ ನಿಗಮದಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲು ನಾಗಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಾಲ್ಲೂಕು ನೋಡಲ್ ಅಧಿಕಾರಿ ಮತ್ತು ಜಿಲ್ಲಾ ವ್ಯವಸ್ಥಾಪಕರು ಈವರೆವಿಗೂ ಸಭೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2020-21ನೇ ಸಾಲಿನಲ್ಲಿ ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದ ಫಲಾಪೇಕ್ಷಿಗಳನ್ನು ಆಯ್ಕೆ ಮಾಡಲು ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿ ದಿನಾಂಕ: 02-03-2021ರಂದು ಆಯ್ಕೆ ಸಮಿತಿ ಸಭೆಯನ್ನು ನಡೆಸಲಾಗಿದೆ. |
| (ಇ) | ಹಾಗಿದ್ದಲ್ಲಿ ಸರ್ಕಾರದ ಮಹಾತ್ವಕಾಂಕ್ಷೆ ಯೋಜನೆಯನ್ನು ಬಡ ಫಲಾನುಭವಿಗಳಗೆ ಸಿಗದಂತೆ ವಿಳಂಬ ದೋರಣೆ ಮಾಡುತ್ತಿರುವ ಜಿಲ್ಲಾ ವ್ಯವಸ್ಥಾಪಕರ ಮತ್ತು ತಾಲ್ಲೂಕು ನೋಡಲ್ ಅಧಿಕಾರಿಯವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ: ಸಕಇ 121 ಎಸ್‌ಡಿಸಿ 2021**

**(ಬಿ.ಶ್ರೀರಾಮುಲು)**
ಸಮಾಜ ಕಲ್ಯಾಣ ಸಚಿವರು.

# ಅನುಬಂಧ

## ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಪರಿಶಿಷ್ಟ ಜಾತಿ ಸಮುದಾಯದವರಿಗೆ ನೀಡಲಾಗುತ್ತಿರುವ ಸೌಲಭ್ಯಗಳ ವಿವರಗಳು.

### 1. ಸ್ವಯಂ ಉದ್ಯೋಗ / ನೇರಸಾಲ

ಸ್ವಯಂ ಉದ್ಯೋಗ ಯೋಜನೆಯಡಿ ಪರಿಶಿಷ್ಟ ಜಾತಿ ಯುವಕ ಯುವತಿಯರಿಗೆ ಸಣ್ಣ ಉದ್ದಿಮೆ ಪ್ರಾರಂಭಿಸಲು ಹಣ್ಣು ಮತ್ತು ತರಕಾರಿಗಳನ್ನು ತಳ್ಳುವಗಾಡಿಯ ಮೂಲಕ ಮಾರಾಟ ಮಾಡಲು, ಹೈನುಗಾರಿಕೆ ಹಾಗೂ ಇತರೆ ಉದ್ದೇಶಗಳಿಗೆ ಘಟಕ ವೆಚ್ಚ ರೂ.೦.50ಲಕ್ಷಗಳಲ್ಲಿ ಸಾಲ ಸೌಲಭ್ಯ ಕಲ್ಪಿಸಲಾಗುವುದು.

### 2. ಉದ್ಯಮಶೀಲತಾ ಯೋಜನೆ (ಐ.ಎಸ್.ಬಿ) (ಬ್ಯಾಂಕುಗಳ ಸಹಯೋಗದಲ್ಲಿ)

ಉದ್ಯಮ ಶೀಲತಾ ಅಭಿವೃದ್ಧಿ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಹಾಪ್‌ಕಾಮ್ಸ್ ಮಾದರಿಯಲ್ಲಿ ಹಣ್ಣು ಮತ್ತು ತರಕಾರಿ ಮಾರಾಟ ಮಾಡಲು ಮಳಿಗೆಗಳನ್ನು ಸ್ಥಾಪಿಸಲು ಮತ್ತು ಇತರ ಉದ್ದೇಶಗಳಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಘಟಕ ವೆಚ್ಚ ರೂ.3.00ಲಕ್ಷ ಆಗಿದ್ದು, ಇದರಲ್ಲಿ ಶೇ.70ರಷ್ಟು ಅಥವಾ ಗರಿಷ್ಠ ಮಿತಿ ರೂ.1.00ಲಕ್ಷದವರೆಗೆ ಸಹಾಯಧನ ಉಳಿದ ಮೊತ್ತ ಬ್ಯಾಂಕ್ ಸಾಲವನ್ನಾಗಿ ನೀಡಬೇಕಾಗುತ್ತದೆ.

### 3. ಭೂ ಒಡೆತನ ಯೋಜನೆ

ಪರಿಶಿಷ್ಟ ಜಾತಿಗೆ ಸೇರಿದ ಭೂ ರಹಿತ ಕೃಷಿ ಕಾರ್ಮಿಕರ ಕುಟುಂಬದ ಮಹಿಳೆಯರಿಗೆ ಮಾತ್ರ ಶೇ.50 ಭಾಗ ಸಹಾಯಧನ ಹಾಗೂ ಶೇ.50 ಭಾಗ ಸಾಲದ ರೂಪದಲ್ಲಿ ಆರ್ಥಿಕ ನೆರವಿನ ಮೂಲಕ ರೂ.15.00ಲಕ್ಷ ಘಟಕ ವೆಚ್ಚದ ಮಿತಿಯಲ್ಲಿ ಕನಿಷ್ಠ 2 ಎಕರೆ ಖುಷ್ಕಿ ಅಥವಾ ಕನಿಷ್ಠ 1 ಎಕರೆ ತರಿ/ಭಾಗಾಯ್ತು ಜಮೀನುಗಳನ್ನು ಅಥವಾ ಬಾಗಾಯ್ತು ಅರ್ಧ ಎಕರೆಗೆ (20 ಗುಂಟೆ) ಕಡಿಮೆಯಲ್ಲದಂತೆ ಒದಗಿಸಲಾಗುವುದು.

### 4. ಗಂಗಾ ಕಲ್ಯಾಣ ಯೋಜನೆ-ವೈಯಕ್ತಿಕ ನೀರಾವರಿ ಕೊಳವೆಬಾವಿ

ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆಯಡಿ 1.00 ಎಕರೆಯಿಂದ 5.00 ಎಕರೆ ಜಮೀನು ಹೊಂದಿರುವ ಪರಿಶಿಷ್ಟ ಜಾತಿಯ ಸಣ್ಣ ಮತ್ತು ಅತೀ ಸಣ್ಣ ರೈತರ ಜಮೀನಿನಲ್ಲಿ ಕೊಳವೆಬಾವಿ ಕೊರೆಸಿ, ಪಂಪ್‌ಸೆಟ್ ಅಳವಡಿಸಿ ವಿದ್ಯುದ್ಧೀಕರಣಗೊಳಿಸಿ ನೀರಾವರಿ ಸೌಲಭ್ಯ ಕಲ್ಪಿಸಲಾಗುವುದು.

### 5. ಮೈಕ್ರೊ ಕ್ರೆಡಿಟ್ (ಪ್ರೇರಣಾ)

ಮಹಿಳೆಯರ ಆರ್ಥಿಕ ಸ್ವಾವಲಂಬನೆ ಮತ್ತು ಸಬಲೀಕರಣ ಉದ್ದೇಶಕ್ಕಾಗಿ **"ಪ್ರೇರಣಾ ಯೋಜನೆ"** ಗಳನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿನ ಪರಿಶಿಷ್ಟ ಜಾತಿ ನಿರುದ್ಯೋಗಿ ಮಹಿಳೆಯರಿಗೆ ಗುಂಪು ಚಟುವಟಿಕೆಗಳ ಮೂಲಕ ಉತ್ಪಾದನಾ ಚಟುವಟಿಕೆಗಳನ್ನು ಆರಂಭಿಸಿ ಲಾಭಗಳಿಸಲು ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ನಿಗಮದಿಂದ ಸಹಾಯದನ ಮತ್ತು ಸಾಲ ನೀಡಲು ಅವಕಾಶ ಮಾಡಿಕೊಡಲಾಗುತ್ತದೆ.

### 6. ಸಮೃದ್ಧಿ ಯೋಜನೆ

ಗ್ರಾಮೀಣ/ನಗರ ಪ್ರದೇಶಗಳಲ್ಲಿನ ಪರಿಶಿಷ್ಟ ಜಾತಿಯ ನಿರುದ್ಯೋಗಿ ಯುವಕ/ಯುವತಿಯರನ್ನು ಉದ್ಯಮ ಶೀಲರನ್ನಾಗಿಸಲು **"ಸಮೃದ್ಧಿ ಯೋಜನೆ"** ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ಸದರಿ ಯೋಜನೆಯಡಿ ಪರಿಶಿಷ್ಟ ಜಾತಿಯ ನಿರುದ್ಯೋಗಿಗಳಿಗೆ ವಿವಿಧ ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ಹಾಗೂ ಲಾಭದಾಯಕವಾಗಿ ನಡೆಸಲು ಅಗತ್ಯವಾದ ಉದ್ಯಮ ಶೀಲತಾ ತರಬೇತಿ/ವೃತ್ತಿ ಕೌಶಲ್ಯ ತರಬೇತಿಯನ್ನು ನೀಡಿ ಮಾರುಕಟ್ಟೆ ವ್ಯವಸ್ಥೆಯೊಂದಿಗೆ ಘಟಕಗಳನ್ನು ಸೃಷ್ಟಿಸಲು ವ್ಯವಸ್ಥೆ ಮಾಡಲಾಗುವುದು.

..2

ಉತ್ತಮ ಮಾರುಕಟ್ಟೆ ಹೊಂದಿರುವ ಸರ್ಕಾರಿ ಮತ್ತು ಖಾಸಗಿ ಬ್ರಾಂಡೆಡ್ ಸಂಸ್ಥೆಗಳ ಸಹಯೋಗದಲ್ಲಿ ಫ್ರಾಂಚೈಸಿ/ಡೀಲರ್‌ಶಿಪ್ ವ್ಯವಸ್ಥೆಯೊಂದಿಗೆ ರಿಟೈಲ್ ವ್ಯಾಪಾರಿ ಮಳಿಗೆಗಳನ್ನು ಆರಂಭಿಸಲು ಅಗತ್ಯವಾದ ತಾಂತ್ರಿಕ ಬೆಂಬಲ ಹಾಗೂ ಆರ್ಥಿಕ ಬೆಂಬಲ ನೀಡಿ ಯಶಸ್ವಿ ಉದ್ದಿಮೆದಾರರನ್ನಾಗಿ ಮಾಡುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ. ಈಗಾಗಲೇ ಸರ್ಕಾರಿ ಮತ್ತು ಬ್ರಾಂಡೆಡ್ ಸಂಸ್ಥೆಗಳ ಜೊತೆ ಸರ್ಕಾರವು ಒಡಂಬಡಿಕೆ (ಎಂಓಯು) ಮಾಡಿಕೊಳ್ಳಲು ವ್ಯವಸ್ಥೆಯಾಗಿರುತ್ತದೆ. ಆಯ್ಕೆಯಾದ ಪ್ರತೀ ಫಲಾನುಭವಿಗೆ ಗರಿಷ್ಠ ರೂ.10.00ಲಕ್ಷಗಳವರೆಗೆ ಆರ್ಥಿಕ ಬೆಂಬಲ ಒದಗಿಸಲಾಗುತ್ತದೆ.

## 7. ಐರಾವತ ಯೋಜನೆ

ಲಘು ವಾಹನ ಚಾಲನಾ ಪರವಾನಗಿ ಹೊಂದಿರುವ ಪರಿಶಿಷ್ಟ ಜಾತಿಯ ನಿರುದ್ಯೋಗಿ ವಿಧ್ಯಾವಂತ ಯುವಕ/ ಯುವತಿಯರಿಗೆ ಪ್ರವಾಸಿ ಟ್ಯಾಕ್ಸಿಗಳ ಮಾಲೀಕರನ್ನಾಗಿ ಮಾಡಿ "ಓಲಾ"/"ಉಬರ್/ಮೇರು" ಸಂಸ್ಥೆಗಳ ಸಹಯೋಗದಲ್ಲಿ ಗರಿಷ್ಠ ರೂ.5.00ಲಕ್ಷಗಳವರೆಗೆ ನಿಗಮದಿಂದ ಸಹಾಯಧನ ಒದಗಿಸಲಾಗುವುದು.

*******